





**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. [1]ಅಲ್ಲಾಹನ ಸಹಾಯ ಬಂದು ಬಿಟ್ಟಾಗ ಮತ್ತು ವಿಜಯ ಪ್ರಾಪ್ತವಾದಾಗ-

اِذَا جَآءَ نَصۡرُ اللّٰهِ وَالۡفَتۡحُ ۙ ١

2. ಮತ್ತು (ಸಂದೇಶವಾಹಕರೇ) ಜನರು ತಂಡೋಪತಂಡವಾಗಿ ಅಲ್ಲಾಹನ ಧರ್ಮದಲ್ಲಿ ಪ್ರವೇಶಿಸುತ್ತಿರುವುದನ್ನು ನೀವು ಕಂಡಾಗ-

وَرَاَيۡتَ النَّاسَ يَدۡخُلُوۡنَ فِىۡ دِيۡنِ اللّٰهِ اَفۡوَاجًا ۙ ٢

3. ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನ ಕೀರ್ತನೆ ಮಾಡಿರಿ ಮತ್ತು ಅವನೊಡನೆ ಕ್ಷಮೆ ಯಾಚಿಸಿರಿ.[2] ನಿಸ್ಸಂದೇಹವಾಗಿಯೂ ಅವನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನಾಗಿರುತ್ತಾನೆ.

فَسَبِّحۡ بِحَمۡدِ رَبِّكَ وَاسۡتَغۡفِرۡهُ ؕ اِنَّهٗ كَانَ تَوَّابًا ٣

---

1. ನಂಬಲರ್ಹ ವರದಿಗಳ ಆಧಾರದಲ್ಲಿ ಇದು ಕುರ್‌ಆನಿನ ಅತ್ಯಂತ ಕೊನೆಯ ಅಧ್ಯಾಯವಾಗಿದೆ. ಇದು ಪ್ರವಾದಿವರ್ಯರ(ಸ) ಮರಣಕ್ಕಿಂತ ಸುಮಾರು ಮೂರು ತಿಂಗಳು ಮೊದಲು ಅವತೀರ್ಣಗೊಂಡಿತ್ತು. ಅನಂತರ ಕೆಲವು ಸೂಕ್ತಗಳು ಅವತೀರ್ಣಗೊಂಡಿವೆಯಾದರೂ ಪೂರ್ಣ ಅಧ್ಯಾಯ ಅವತೀರ್ಣಗೊಂಡಿಲ್ಲ.
2. ಈ ಸೂಕ್ತದ ಅವತರಣದ ನಂತರ ಪ್ರವಾದಿವರ್ಯರು(ಸ) ತಮ್ಮ ಕೊನೆಯ ದಿನಗಳಲ್ಲಿ ಹೆಚ್ಚೆಚ್ಚು ಸ್ತುತಿ-ಸ್ತೋತ್ರ ಮತ್ತು ಕ್ಷಮಾಯಾಚನೆಯಲ್ಲಿ ತೊಡಗಿದ್ದರೆಂದೂ ವರದಿಗಳಿಂದ ತಿಳಿದು ಬರುತ್ತದೆ.